## ॥ ಉದರ ವೈರಾಗ್ಯವಿದು ॥

ಉದರ ವೈರಾಗ್ಯವಿದು ।
ನಮ್ಮ ಪದುಮನಾಭನಲಿ ಲೇಶ ಭಕುತಿಯಿಲ್ಲ ॥ ಪ ॥

ಉದಯಕಾಲದಲೆದ್ದು ಗಡಗಡ ನಡುಗುತ ।
ನದಿಯಲಿ ಮಿಂದೆನೆಂದು ಹಿಗ್ಗುತಲಿ ॥
ಮದ ಮತ್ಸರ ಕ್ರೋಧ ಒಳಗೆ ತುಂಬಿಟ್ಟುಕೊಂಡು ।
ಬದಿಯಲ್ಲಿದ್ದವರಿಗಾಶ್ಚರ್ಯವ ತೋರುವುದುದರ ॥ ೧ ॥

ಕಂಚುಗಾರನ ಬಿಡಾರದಂದದಿ ।
ಕಂಚು ಹಿತ್ತಾಳೆ ಪ್ರತಿಮೆಗಳ ನೆರಹಿ ॥
ಮಿಂಚಬೇಕೆಂದು ಬಲು ಜ್ಯೋತಿಗಳನು ಹಚ್ಚಿ ।
ವಂಚನೆಯಿಂದಲಿ ಪೂಜೆಯ ಮಾಡುವುದುದರ ॥ ೨ ॥

ಕರದಲಿ ಜಪಮಣಿ ಬಾಯಲಿ ಮಂತ್ರವು ।
ಅರಿವೆ ಮುಸುಕು ಮೋರೆಗೆ ಹಾಕಿ ॥
ಪರಸತಿಯರ ಗುಣ ಮನದಲಿ ಸ್ಮರಿಸುತ ।
ಪರಮ ವೈರಾಗ್ಯಶಾಲಿಯೆಂದೆನಿಸುವುದುದರ ॥ ೩ ॥

ಬೂಟಕತನದಲಿ ಬಹಳ ಭಕುತಿ ಮಾಡಿ ।
ದಿಟನೀತ ಸರಿಯಾರಿಲ್ಲೆನಿಸಿ ॥
ನಾಟಕ ಸ್ತ್ರೀಯಂತೆ ಬಯಲಡಂಭವ ತೋರಿ ।
ಊಟದ ಮಾರ್ಗದ ಜ್ಞಾನವಿದಲ್ಲದೆ ಉದರ ॥ ೪ ॥

ನಾನು ಎಂಬುದು ಬಿಟ್ಟು ಜ್ಞಾನಿಗಳೊಡನಾಡಿ ।
ಏನಾದರೂ ಹರಿ ಪ್ರೇರಣೆ ಎಂದು ॥
ಧ್ಯಾನಿಸಿ ಮೌನದಿ ಪುರಂದರವಿಠಲನ ।
ಕಾಣದೆ ಮಾಡಿದ ಕಾರ್ಯಗಳೆಲ್ಲವು ಉದರ ॥ ೫ ॥